ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ಹೆಗ್ಗಡದೇವನಕೋಟೆ ಸರಗೂರು ನಡುವೆ ಹೆಚ್ಚಿನ ಬಸ್ ಸೌಲಭ್ಯ ಒದಗಿಸುವ ಬಗ್ಗೆ

ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

369 (439) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಹೆಚ್.ಡಿ. ಕೋಟೆಯಿಂದ ನೂತನ ತಾಲ್ಲೂಕು ಕೇಂದ್ರವಾದ ಸರಗೂರಿಗೆ ಸಾರಿಗೆ ಬಸ್ ಸೌಲಭ್ಯ ಹೆಚ್ಚಿಸಲು ಹಾಗೂ ಈ ಬಸ್‌ಗಳನ್ನು ಹೆಗ್ಗಡದೇವನ ಕೋಟೆ ಬಸ್ ಡಿಪೋಗೆ ಸೇರಿರುವ ಬಸ್‌ಗಳನ್ನೇ ಒದಗಿಸಲು ಕ್ರಮ ಜರುಗಿಸಲಾಗುವುದೇ;

(ಆ) ಕೊತ್ತೇಗಾಲ, ಪುರದಕಟ್ಟೆ, ಹಲಸೂರು, ಮಟಕೆರೆ, ಬಾಳಿಗ, ಹಂಚಿಪುರ, ಚೆನ್ನಗುಂಡಿ, ಹರಳಹಳ್ಳಿ, ಹಾದನೂರು, ಬಡಗಲಪುರ, ಹೆಡಿಯಾಲ ಮೊದಲಾದ ಕಡೆಗಳಿಂದ ಬರುವ ಸಾರ್ವಜನಿಕರು ಹಾಗೂ ಶಾಲಾ ಮಕ್ಕಳಿಗೆ ಸೂಕ್ತ ಕಾಲಕ್ಕೆ ಬಸ್‌ಗಳಿಲ್ಲದೆ ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಚೆನ್ನಗುಂಡಿ ಗ್ರಾಮದಿಂದ ಸರಗೂರು, ಹೆಚ್.ಡಿ. ಕೋಟೆಗೆ ನೇರ ಬಸ್ ಸೌಲಭ್ಯ ಇಲ್ಲದೇ ಈ ಗ್ರಾಮ ಹಾಗೂ ಸುತ್ತಮುತ್ತಲ ಗ್ರಾಮಸ್ಥರು ಹೆಡಿಯಾಲಕ್ಕೆ ಬಂದು ಬಸ್ ಹತ್ತಬೇಕಾಗಿರುವುದರಿಂದ ಚೆನ್ನಗುಂಡಿಯಿಂದ ನೇರ ಬಸ್ ಸೌಲಭ್ಯ ಕಲ್ಪಿಸಲು ಕ್ರಮ ಜರುಗಿಸಲಾಗುವುದೇ?